ಸದನದಲ್ಲಿ ಉತ್ತರಿಸುವ ಪ್ರಶ್ನೆ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಮಂಗಳವಾರ, ದಿನಾಂಕ: 23ನೇ ಜುಲೈ, 2019

ಬೆಂಗಳೂರು ವಿಶ್ವವಿದ್ಯಾಲಯದ ತ್ರಿವಿಭಜನೆಯಲ್ಲಿ ಕೋಲಾರ ಸ್ನಾತಕೋತ್ತರ ಬಗ್ಗೆ

ಶ್ರೀ ಹೆಚ್.ಎಂ. ರೇವಣ್ಣ (ವಿಧಾನಸಭೆಯಿಂದ ಚುನಾಯಿತರಾದವರು) -

99 (526) ಉನ್ನತ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಬೆಂಗಳೂರು ವಿಶ್ವವಿದ್ಯಾಲಯದ ತ್ರಿಭಜನೆಯ ಹಿನ್ನೆಲೆಯಲ್ಲಿ ಕೋಲಾರ ಸ್ನಾತಕೋತ್ತರ ಕೇಂದ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದ ವಿಭಾಗಗಳಲ್ಲಿನ ಭೋಧನಾ ಅಗತ್ಯಗಳಿಗೆ ಅನುಗುಣವಾಗಿ ನೇಮಕಗೊಂಡಿದ್ದ ಅಧ್ಯಾಪಕರಿಗೆ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಹೋಗಲು ಅವಕಾಶ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಸಂಬಂಧಪಟ್ಟ ವಿಭಾಗಗಳಲ್ಲಿ ಅಗತ್ಯಕ್ಕಿಂತ ಹೆಚ್ಚು ಅಧ್ಯಾಪಕರು ಸೇರ್ಪಡೆಯಾಗಿದ್ದು, ಕೋಲಾರದಿಂದ ಬೆಂಗಳೂರಿಗೆ ಹೊರ ಅಧ್ಯಾಪಕರಿಗೆ ಕಾರ್ಯಭಾರ ಇಲ್ಲದಿರುವುದನ್ನು ಸರ್ಕಾರ ಗಮನಿಸಿದೆಯೇ ;

(ಇ) ಕಾರ್ಯಭಾರವೇ ಇಲ್ಲದೆ ಅಧ್ಯಾಪಕರ ವೇತನ ನೀಡುತ್ತಿರುವುದರಿಂದ ಸಾರ್ವಜನಿಕರ ಸಂಪತ್ತಿನ ಅಪವ್ಯಯವಾಗುತ್ತಿರುವುದನ್ನು ಸರಿಪಡಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ ?